# ಶ್ರೀ ಮನಸಾದೇವಿ ಸ್ತೋತ್ರ

(ಸಕಲ ನಾಗ ದೋಷ ಪರಿಹಾರ)



ಸಂಗ್ರಾಹಕರು: ವೈದ್ಯ ಕಾ.ರಾ. ಪುರಾಣಿಕ

ಶ್ರೀ ಧನ್ವಂತರಿ ಪ್ರೋಕ್ತ

# ಶ್ರೀ ಮನಸಾದೇವಿ ಸ್ತೋತ್ರ

(ಸಕಲ ನಾಗ ದೋಷ ಪರಿಹಾರ)

ಸಂಗ್ರಾಹಕರು : ವೈದ್ಯ ಕಾ.ರಾ. ಪುರಾಣಿಕ

ಪ್ರಕಾಶಕರು

**ಆಯುರ್ವೇದ ಕಾರ್ಯಾಲಯ**

ನಂ.79, 6ನೇ ಮುಖ್ಯ ರಸ್ತೆ, 18ನೇ ಅಡ್ಡ ರಸ್ತೆ,
ಮಲ್ಲೇಶ್ವರಂ, ಬೆಂಗಳೂರು 560 055

ಮುದ್ರಕರು

**ಮಾ ಪ್ರಿಂಟರ್ಸ್**

ನಂ.227/493, ಪಟ್ಟೆಗಾರ ಪಾಳ್ಯ, ಬೆಂಗಳೂರು - 560079
**Ph : 3286128 / 3380779**

ಬೆಲೆ ರೂ 10/-

# ನಿವೇದನೆ

ಬ್ರಹ್ಮವೈವರ್ತ ಮಹಾಪುರಾಣದ ಐವತ್ತೊಂಬತ್ತನೆ ಅಧ್ಯಾಯ ಶ್ರೀ ಧನ್ವಂತರಿ "ಗರ್ವಭಂಗ" ವೆಂದಿದೆ. ಇಲ್ಲಿ ಶ್ರೀ ಧನ್ವಂತರಿಯು ಮತ್ತು ಸರ್ಪಗಳ - ಅದರಲ್ಲಿಯೂ ನಾಗಗಳ ರಾಣಿ ಶ್ರೀ ಮನಸಾದೇವಿಗೆ ಯುದ್ಧವಾಗುವುದು. ಇದರಲ್ಲಿ ಶ್ರೀ ಧನ್ವಂತರಿಯು ಸೋತದ್ದೂ ಇಲ್ಲ - ಗರ್ವಭಂಗ ಆಗಿದ್ದೂ ಇಲ್ಲ. ಯುದ್ಧದ ಮಧ್ಯೆ ಬ್ರಹ್ಮ ಮತ್ತು ಈಶ್ವರರು ಪ್ರವೇಶಮಾಡಿ - ಆಕೆಯನ್ನು ಮನ್ನಿಸಿ ಸ್ತುತಿಸಬೇಕೆಂಬ ಸಲಹೆಯನ್ನು ಶ್ರೀ ಧನ್ವಂತರಿಯು ಮನ್ನಿಸಿ ಶ್ರೀ ಮನಸಾದೇವಿಯನ್ನು ಸ್ತುತಿಸಿ ಪೂಜಿಸುವನು. ಶ್ರೀ ಧನ್ವಂತರಿಯೂ ಪೂಜಿಸಿದ, ಸ್ತುತಿಸಿದ ಈ ನಾಗದೇವತೆಯ ಸ್ತೋತ್ರ ಮಾತ್ರದಿಂದಲೇ ನಾಗದೋಷಗಳೇನಿದ್ದರೂ

ಪರಿಹಾರವೆಂದಿದೆ. ಇದರ ಲಾಭ ನಾಗದೋಷಪೀಡಿತರಿಗೆ ಸಿಗಲಿ ಎಂಬ ಉದ್ದೇಶದಿಂದ ಇದನ್ನು ಸಂಗ್ರಹಿಸಿ ಕೊಡಲಾಗಿದೆ.

ಇದರ ಖರ್ಚನ್ನು ಕುಮಾರಿ ಅಂಜು ಶೆಣ್ಯೆ ಇವರು ವಹಿಸಿರುವರು ಇವರಿಗೂ - ಮುಖಚಿತ್ರ ಬರೆದುಕೊಟ್ಟ ಶ್ರೀ ಗಣೇಶಗುಡಿ, ಮೈಸೂರು ಮತ್ತು ಈ ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಇಂಡಸ್ಟ್ರೀಯಲ್ ಮತ್ತು ಕಮರ್ಷಿಯಲ್ ಪ್ರಿಂಟ್ಸ್, ಬೆಂಗಳೂರು ಇವರಿಗೂ ಶ್ರೀ ಧನ್ವಂತರಿ ಮತ್ತು ಶ್ರೀ ಮನಸಾದೇವಿಯು ಸಕಲವಿಧಗಳಿಂದ ಅನುಗ್ರಹಿಸಲೆಂದು ಹಾರೈಸುತ್ತೇನೆ.

ದೀಪಾವಳಿ ಶುಭದಿನ
೨೬-೧೧-೨೦೦೦

ವೈದ್ಯ ಕಾ.ರಾ. ಪುರಾಣಿಕ

# ಈ ಪುಸ್ತಕದ ಸಾರಾಂಶ

ಧನ್ವಂತರಿಯ ಗರ್ವಭಂಗದ ಕಥೆ —— ದೇವಾಸುರರು ಕ್ಷೀರಸಮುದ್ರವನ್ನು ಮಥನವಮಾಡಿದಾಗ ಅಲ್ಲಿಂದ ಹೊರಕ್ಕೆ ಬಂದ ಧನ್ವಂತರಿಯು ವೇದವೇದಾಂಗಗಳಲ್ಲಿಯೂ, ಮಂತ್ರತಂತ್ರಗಳಲ್ಲಿಯೂ ನಿಪುಣನಾಗಿದ್ದುದಲ್ಲದೆ ಗರುಡನ ಮತ್ತು ಈಶ್ವರನ ಪರಮಶಿಷ್ಯನಾಗಿದ್ದನು. ಅವನು ಒಮ್ಮೆ ತನ್ನ ಸಾವಿರಮಂದಿ ಶಿಷ್ಯರೊಡನೆ ಕೈಲಾಸಪರ್ವತಕ್ಕೆ ಹೋಗುತ್ತಾ ದಾರಿಯಲ್ಲಿ ತಕ್ಷಕನೆಂಬ ಸರ್ಪವನ್ನು ಕಂಡನು. ಲಕ್ಷ ಸರ್ಪಗಳ ಪರಿವಾರದಿಂದ ಕೂಡಿದ ಆ ತಕ್ಷಕನು ಇವನನ್ನು ತಿನ್ನಲು ಬರಲು, ಇವನ ಶಿಷ್ಯರಲ್ಲೊಬ್ಬನು ಆ ತಕ್ಷಕನ ಬಾಯನ್ನು ಹಿರಿದು ವಿಷವನ್ನೆಲ್ಲ ಮಂತ್ರಶಕ್ತಿಯಿಂದ ನಾಶಗೊಳಿಸಿದನು. ಅವನ ಹೆಡೆಯಲ್ಲಿದ್ದ ಅನರ್ಘ್ಯರತ್ನವನ್ನೂ ಕಿತ್ತುಬಿಸಾಡಿದನು. ಇತ್ತ ತಕ್ಷಕನು ನಿಶ್ಚೇಷ್ಟನಾಗಿ

ಬಿದ್ದಿರುವುದನ್ನು ಇತರ ಸರ್ಪಗಳು ವಾಸುಕಿಗೆ ತಿಳಿಸಲು, ಸರ್ಪರಾಜನಾದ ವಾಸುಕಿಯು ಕಾಲೀಯ ಮುಂತಾದ ಮಹಾವಿಷವುಳ್ಳ ಐದು ಸರ್ಪಗಳನ್ನು ಕಳುಹಿಸಲು ಅವುಗಳೆಲ್ಲವೂ ಧನ್ವಂತರಿಯನ್ನು ಅಡ್ಡಗಟ್ಟಿದವು. ಆ ಸರ್ಪಗಳ ವಿಷದ ಗಾಳಿಯ ಸೋಂಕಿನಿಂದ ಧನ್ವಂತರಿಯ ಶಿಷ್ಯರೆಲ್ಲರೂ ಮೂರ್ಛೆಗೊಳ್ಳಲು ಧನ್ವಂತರಿಯು ಮಂತ್ರಶಕ್ತಿಯಿಂದ ಅಮೃತವೃಷ್ಟಿಯನ್ನು ಸುರಿಸಿ ಅವರನ್ನೆಲ್ಲ ಚೇತನಗೊಳಿಸಿದನು. ಅಲ್ಲದೆ ತನ್ನ ಮಂತ್ರಶಕ್ತಿಯಿಂದ ಆ ಮಹಾಸರ್ಪಗಳೆಲ್ಲವನ್ನೂ ನಿಶ್ಶೇಷ್ಯವಾಗುವಂತೆ ಮಾಡಿದನು. ಇದನ್ನು ಜ್ಞಾನದೃಷ್ಟಿಯಿಂದರಿತ ವಾಸುಕಿಯು ತನ್ನ ಸಹೋದರಿಯಾದ ಮನಸಾದೇವಿಯನ್ನು ಪ್ರಾರ್ಥಿಸಲು ಆಕೆಯು ಧನ್ವಂತರಿಯು ತನ್ನ ಸಹೋದರಿಯಾದ ಮನಸಾದೇವಿಯನ್ನು ಪ್ರಾರ್ಥಿಸಲು ಆಕೆಯು ಧನ್ವಂತರಿಯ ನಿಗ್ರಹಕ್ಕಾಗಿ ಅವನಿದ್ದೆಡೆಗೆ ಬಂದಳು. ತನ್ನ ಅಮೃತಮಯವಾದ ದೃಷ್ಟಿಯಿಂದಲೇ ಸರ್ಪಗಳನ್ನೆಲ್ಲ

ಬದುಕಿಸಿ ವಿಷಮಯವಾದ ದೃಷ್ಟಿಯನ್ನು ಬೀರಿ ಧನ್ವಂತರಿ ಶಿಷ್ಯರನ್ನೆಲ್ಲ ಮೂರ್ಛೆಗೊಳಿಸಿದಳು. ಧನ್ವಂತರಿಯು ತನ್ನ ಮಂತ್ರಪ್ರಭಾವದಿಂದ ಅವರನ್ನು ಬದುಕಿಸಲಾಗಲಿಲ್ಲ. ಮನಸಾದೇವಿಯು ಒಂದು ತಾವರೆಹೂವನ್ನು ತೆಗೆದುಕೊಂಡು ಮಂತ್ರಿಸಿ ಧನ್ವಂತರಿಯ ಮೇಲೆ ಬಿಡಲು ಧನ್ವಂತರಿಯು ತನ್ನ ನಿಟ್ಟುಸಿರಿನಿಂದ ಅದನ್ನು ಬೂದಿಮಾಡಿದನು. ಆದರೂ ವಿಷಮಯವಾದ ಆ ಭಸ್ಮರಾಶಿಯು ಇವನ ಮೇಲೆ ಬೀಳಲು ಬಂದಾಗ ಅದರ ಮೇಲೆ ಒಂದುಹಿಡಿ ಮಣ್ಣನ್ನು ಮಂತ್ರಿಸಿ ಎರಚಿ ನಾಶಪಡಿಸಿದನು. ಆಗ ಮನಸೆಯು ಕ್ರಮವಾಗಿ ತನ್ನ ಶಕ್ತ್ಯಾಯುಧ, ಪಾಶಾಯುಧಗಳನ್ನು ಪ್ರಯೋಗಿಸಿ ಅವೂ ವ್ಯರ್ಥವಾಗಲು ಈಶ್ವರನ ವರದಿಂದ ಲಬ್ಧವಾದ ತ್ರಿಶೂಲವನ್ನು ಹಿಡಿದಳು. ಕೂಡಲೇ ಧನ್ವಂತರಿಯು ಗರುಡನನ್ನೂ, ಮಹೇಶ್ವರನನ್ನೂ ಭಜಿಸಲು ಅವರೀರ್ವರೂ ಪ್ರತ್ಯಕ್ಷವಾಗಿ ಮನಸಾದೇವಿಯ

ಪ್ರಕಾಶಕರು

**ಆಯುರ್ವೇದ ಕಾರ್ಯಾಲಯ**

ನಂ. 79, 6ನೇ ಮುಖ್ಯ ರಸ್ತೆ, 18ನೇ ಅಡ್ಡ ರಸ್ತೆ,
ಮಲ್ಲೇಶ್ವರಂ, ಬೆಂಗಳೂರು 560 055

ಮುದ್ರಕರು

**ಮಾ ಪ್ರಿಂಟರ್ಸ್**

ನಂ. 227/493, ಪಟ್ಟೆಗಾರ ಪಾಳ್ಯ, ಬೆಂಗಳೂರು - 560079
**Ph : 3286128 / 3380779**

ಬೆಲೆ ರೂ 10/-

# ನಿವೇದನೆ

ಬ್ರಹ್ಮವೈವರ್ತ ಮಹಾಪುರಾಣದ ಐವತ್ತೊಂಬತ್ತನೆ ಅಧ್ಯಾಯ ಶ್ರೀ ಧನ್ವಂತರಿ "ಗರ್ವಭಂಗ" ವೆಂದಿದೆ. ಇಲ್ಲಿ ಶ್ರೀ ಧನ್ವಂತರಿಯು ಮತ್ತು ಸರ್ಪಗಳ - ಅದರಲ್ಲಿಯೂ ನಾಗಗಳ ರಾಣಿ ಶ್ರೀ ಮನಸಾದೇವಿಗೆ ಯುದ್ಧವಾಗುವುದು. ಇದರಲ್ಲಿ ಶ್ರೀ ಧನ್ವಂತರಿಯು ಸೋತದ್ದೂ ಇಲ್ಲ - ಗರ್ವಭಂಗ ಆಗಿದ್ದೂ ಇಲ್ಲ. ಯುದ್ಧದ ಮಧ್ಯೆ ಬ್ರಹ್ಮ ಮತ್ತು ಈಶ್ವರರು ಪ್ರವೇಶಮಾಡಿ - ಆಕೆಯನ್ನು ಮನ್ನಿಸಿ ಸ್ತುತಿಸಬೇಕೆಂಬ ಸಲಹೆಯನ್ನು ಶ್ರೀ ಧನ್ವಂತರಿಯು ಮನ್ನಿಸಿ ಶ್ರೀ ಮನಸಾದೇವಿಯನ್ನು ಸ್ತುತಿಸಿ ಪೂಜಿಸುವನು. ಶ್ರೀ ಧನ್ವಂತರಿಯೂ ಪೂಜಿಸಿದ, ಸ್ತುತಿಸಿದ ಈ ನಾಗದೇವತೆಯ ಸ್ತೋತ್ರ ಮಾತ್ರದಿಂದಲೇ ನಾಗದೋಷಗಳೇನಿದ್ದರೂ

ಪರಿಹಾರವೆಂದಿದೆ. ಇದರ ಲಾಭ ನಾಗದೋಷಪೀಡಿತರಿಗೆ ಸಿಗಲಿ ಎಂಬ ಉದ್ದೇಶದಿಂದ ಇದನ್ನು ಸಂಗ್ರಹಿಸಿ ಕೊಡಲಾಗಿದೆ.

ಇದರ ಖರ್ಚನ್ನು ಕುಮಾರಿ ಅಂಜು ಶೆಣೈ ಇವರು ವಹಿಸಿರುವರು ಇವರಿಗೂ - ಮುಖಚಿತ್ರ ಬರೆದುಕೊಟ್ಟ ಶ್ರೀ ಗಣೇಶಗುಡಿ, ಮೈಸೂರು ಮತ್ತು ಈ ಪುಸ್ತಕವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಇಂಡಸ್ಟ್ರಿಯಲ್ ಮತ್ತು ಕಮರ್ಷಿಯಲ್ ಪ್ರಿಂಟರ್ಸ್, ಬೆಂಗಳೂರು ಇವರಿಗೂ ಶ್ರೀ ಧನ್ವಂತರಿ ಮತ್ತು ಶ್ರೀ ಮಾನಸಾದೇವಿಯು ಸಕಲವಿಧಗಳಿಂದ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ದೀಪಾವಳಿ ಶುಭದಿನ                ವೈದ್ಯ ಕಾ.ರಾ. ಪುರಾಣಿಕ
೨೬-೧೧-೨೦೦೦

# ಈ ಪುಸ್ತಕದ ಸಾರಾಂಶ

ಧನ್ವಂತರಿಯ ಗರ್ವಭಂಗದ ಕಥೆ —— ದೇವಾಸುರರು ಕ್ಷೀರಸಮುದ್ರವನ್ನು ಮಥನಮಾಡಿದಾಗ ಅಲ್ಲಿಂದ ಹೊರಕ್ಕೆ ಬಂದ ಧನ್ವಂತರಿಯು ವೇದವೇದಾಂಗಗಳಲ್ಲಿಯೂ, ಮಂತ್ರತಂತ್ರಗಳಲ್ಲಿಯೂ ನಿಪುಣನಾಗಿದ್ದುದಲ್ಲದೆ ಗರುಡನ ಮತ್ತು ಈಶ್ವರನ ಪರಮಶಿಷ್ಯನಾಗಿದ್ದನು. ಅವನು ಒಮ್ಮೆ ತನ್ನ ಸಾವಿರಮಂದಿ ಶಿಷ್ಯರೊಡನೆ ಕೈಲಾಸಪರ್ವತಕ್ಕೆ ಹೋಗುತ್ತಾ ದಾರಿಯಲ್ಲಿ ತಕ್ಷಕನೆಂಬ ಸರ್ಪವನ್ನು ಕಂಡನು. ಲಕ್ಷ ಸರ್ಪಗಳ ಪರಿವಾರದಿಂದ ಕೂಡಿದ ಆ ತಕ್ಷಕನು ಇವನನ್ನು ತಿನ್ನಲು ಬರಲು, ಇವನ ಶಿಷ್ಯರಲ್ಲೊಬ್ಬನು ಆ ತಕ್ಷಕನ ಬಾಯನ್ನು ಹಿರಿದು ವಿಷವನ್ನೆಲ್ಲ ಮಂತ್ರಶಕ್ತಿಯಿಂದ ನಾಶಗೊಳಿಸಿದನು. ಅವನ ಹೆಡೆಯಲ್ಲಿದ್ದ ಅನರ್ಘ್ಯರತ್ನವನ್ನೂ ಕಿತ್ತುಬಿಸಾಡಿದನು. ಇತ್ತ ತಕ್ಷಕನು ನಿಶ್ಚೇಷ್ಟನಾಗಿ

ಬಿದ್ದಿರುವುದನ್ನು ಇತರ ಸರ್ಪಗಳು ವಾಸುಕಿಗೆ ತಿಳಿಸಲು, ಸರ್ಪರಾಜನಾದ ವಾಸುಕಿಯು ಕಾಲೀಯ ಮುಂತಾದ ಮಹಾವಿಷವುಳ್ಳ ಐದು ಸರ್ಪಗಳನ್ನು ಕಳುಹಿಸಲು ಅವುಗಳೆಲ್ಲವೂ ಧನ್ವಂತರಿಯನ್ನು ಅಡ್ಡಗಟ್ಟಿದವು. ಆ ಸರ್ಪಗಳ ವಿಷದ ಗಾಳಿಯ ಸೋಂಕಿನಿಂದ ಧನ್ವಂತರಿಯ ಶಿಷ್ಯರೆಲ್ಲರೂ ಮೂರ್ಛೆಗೊಳ್ಳಲು ಧನ್ವಂತರಿಯು ಮಂತ್ರಶಕ್ತಿಯಿಂದ ಅಮೃತವೃಷ್ಟಿಯನ್ನು ಸುರಿಸಿ ಅವರನ್ನೆಲ್ಲ ಚೇತನಗೊಳಿಸಿದನು. ಅಲ್ಲದೆ ತನ್ನ ಮಂತ್ರಶಕ್ತಿಯಿಂದ ಆ ಮಹಾಸರ್ಪಗಳೆಲ್ಲವನ್ನೂ ನಿಶ್ಯೇಷ್ಟವಾಗುವಂತೆ ಮಾಡಿದನು. ಇದನ್ನು ಜ್ಞಾನದೃಷ್ಟಿಯಿಂದರಿತ ವಾಸುಕಿಯು ತನ್ನ ಸಹೋದರಿಯಾದ ಮನಸಾದೇವಿಯನ್ನು ಪ್ರಾರ್ಥಿಸಲು ಆಕೆಯು ಧನ್ವಂತರಿಯು ತನ್ನ ಸಹೋದರಿಯಾದ ಮನಸಾದೇವಿಯನ್ನು ಪ್ರಾರ್ಥಿಸಲು ಆಕೆಯು ಧನ್ವಂತರಿಯ ನಿಗ್ರಹಕ್ಕಾಗಿ ಅವನಿದ್ದೆಡೆಗೆ ಬಂದಳು. ತನ್ನ ಅಮೃತಮಯವಾದ ದೃಷ್ಟಿಯಿಂದಲೇ ಸರ್ಪಗಳನ್ನೆಲ್ಲ

ಬದುಕಿಸಿ ವಿಷಮಯವಾದ ದೃಷ್ಟಿಯನ್ನು ಬೀರಿ ಧನ್ವಂತರಿ ಶಿಷ್ಯರನ್ನೆಲ್ಲ ಮೂರ್ಛೆಗೊಳಿಸಿದಳು. ಧನ್ವಂತರಿಯು ತನ್ನ ಮಂತ್ರಪ್ರಭಾವದಿಂದ ಅವರನ್ನು ಬದುಕಿಸಲಾಗಲಿಲ್ಲ. ಮನಸಾದೇವಿಯು ಒಂದು ತಾವರೆಹೂವನ್ನು ತೆಗೆದುಕೊಂಡು ಮಂತ್ರಿಸಿ ಧನ್ವಂತರಿಯ ಮೇಲೆ ಬಿಡಲು ಧನ್ವಂತರಿಯು ತನ್ನ ನಿಟ್ಟುಸಿರಿನಿಂದ ಅದನ್ನು ಬೂದಿಮಾಡಿದನು. ಆದರೂ ವಿಷಮಯವಾದ ಆ ಭಸ್ಮರಾಶಿಯು ಇವನ ಮೇಲೆ ಬೀಳಲು ಬಂದಾಗ ಅದರ ಮೇಲೆ ಒಂದುಹಿಡಿ ಮಣ್ಣನ್ನು ಮಂತ್ರಿಸಿ ಎರಚಿ ನಾಶಪಡಿಸಿದನು. ಆಗ ಮನಸೆಯು ಕ್ರಮವಾಗಿ ತನ್ನ ಶಕ್ತ್ಯಾಯುಧ, ಪಾಶಾಯುಧಗಳನ್ನು ಪ್ರಯೋಗಿಸಿ ಅವೂ ವ್ಯರ್ಥವಾಗಲು ಈಶ್ವರನ ವರದಿಂದ ಲಬ್ಧವಾದ ತ್ರಿಶೂಲವನ್ನು ಹಿಡಿದಳು. ಕೂಡಲೇ ಧನ್ವಂತರಿಯು ಗರುಡನನ್ನೂ, ಮಹೇಶ್ವರನನ್ನೂ ಭಜಿಸಲು ಅವರೀರ್ವರೂ ಪ್ರತ್ಯಕ್ಷವಾಗಿ ಮನಸಾದೇವಿಯ

ಮಹಿಮೆಯನ್ನು ಧನ್ವಂತರಿಗೆ ವಿವರಿಸಿ ಕೌಥುಮಶಾಖೋಕ್ತಪ್ರಕಾರವಾಗಿ ಆಕೆಯನ್ನು ಪೂಜಿಸಲು ಧನ್ವಂತರಿಗೆ ಹೇಳಿದರು. ಅದರಂತೆ ಧನ್ವಂತರಿಯು ಮನಸಾದೇವಿಯನ್ನು ಭಕ್ತಿಪೂರ್ವಕವಾಗಿ ಭಜಿಸಿ ಆಕೆಯ ಅನುಗ್ರಹಕ್ಕೆ ಪಾತ್ರನಾದನು.

ಈ ರೀತಿ ಧನ್ವಂತರಿಯ ಗರ್ವಭಂಗವಾದುದನ್ನು ಶ್ರೀಕೃಷ್ಣನು ರಾಧಾದೇವಿಗೆ ವಿವರಿಸಿದನು.

(ಮನಸಾದೇವಿಗೆ — ಮಾನಸಾದೇವಿ ಎಂದು ಕರೆಯುವ ರೂಢಿಯಿದೆ. ಈ ಮಾನಸಾದೇವಿಯು ಉತ್ತರ ಹಿಂದೂಸ್ಥಾನದಲ್ಲಿ ಪ್ರಸಿದ್ಧಳು (ಹರಿದ್ವಾರ — ನೈನಿತಾಲ್ ವಗೈರೆ)

* * * * *

ಶ್ರೀ ಬ್ರಹ್ಮವೈವರ್ತ ಮಹಾಪುರಾಣಾಂತರ್ಗತ

ಶ್ರೀ ಧನ್ವಂತರಿ ಪ್ರೋಕ್ತ

# ಶ್ರೀ ಮನಸಾದೇವಿ ಸ್ತೋತ್ರ - ಕಥಾ

॥ ಏಕಪಂಚಾಶತ್ತಮೋಽಧ್ಯಾಯ ॥

॥ ಶ್ರೀ ಕೃಷ್ಣ ಉವಾಚ ॥

ನಾರಾಯಣಾಂಶೋ ಭಗವಾನ್ಸ್ವಯಂ ಧನ್ವಂತರಿರ್ಮಹಾನ್ ।
ಪುರಾ ಸಮುದ್ರಮಥನೇ ಸಮುತ್ತಸ್ಥೌ ಮಹೋದಧೇಃ ॥೧॥

ಸರ್ವವೇದೇಷು ನಿಷ್ಣಾತೋ ಮಂತ್ರತಂತ್ರವಿಶಾರದಃ ।
ಶಿಷ್ಯೋ ಹಿ ವೈನತೇಯಸ್ಯ ಶಂಕರಸ್ಯೋಪಶಿಷ್ಯಕಃ ॥೨॥

ಶಿಷ್ಯಾಣಾಂ ಚ ಸಹಸ್ರೇಣ ಗತಃ ಕೈಲಾಸಮೀಶ್ವರಿ ।
ದದರ್ಶ ತಕ್ಷಕಂ ಮಾರ್ಗೇ ಲೇಲಿಹಾನಂ ಭಯಾನಕಂ ॥೩॥

# ಐವತ್ತೊಂದನೆಯ ಅಧ್ಯಾಯ

೧. ಶ್ರೀಕೃಷ್ಣನು ಹೇಳುತ್ತಾನೆ :- ಹಿಂದೆ ಸಮುದ್ರಮಥನ ಕಾಲದಲ್ಲಿ ಸಾಕ್ಷಾನ್ನಾರಾಯಣನ ಅಂಶವನ್ನು ಹೊಂದಿದ ಪೂಜ್ಯನಾದ ಧನ್ವಂತರಿಯು ಸಮುದ್ರ ಮಥನದಿಂದ ಮೇಲಕ್ಕೆ ಬಂದನು.

೨. ಆ ಧನ್ವಂತರಿಯು ಸಕಲ ವೇದಗಳಲ್ಲಿಯೂ ನಿಪುಣನಾಗಿ ಸಕಲ ಮಂತ್ರತಂತ್ರಗಳಲ್ಲಿಯೂ ಪ್ರಾಜ್ಞನಾಗಿ ಗರುಡನ ಮುಖ್ಯ ಶಿಷ್ಯನೂ ಈಶ್ವರನ ಶಿಷ್ಯ ಸಮೂಹದಲ್ಲಿ ಸೇರಿದವನೂ ಆಗಿದ್ದನು.

೩. ಅವನು ಒಂದುದಿನ ಸಾವಿರಾರು ಶಿಷ್ಯರೊಡನೆ ಕೈಲಾಸಕ್ಕೆ ಹೋದನು. ಅಲ್ಲಿ ದಾರಿಯಲ್ಲಿ ಭಯಂಕರನಾದ, ನಾಲಿಗೆಯನ್ನು ಸವರಿಕೊಳ್ಳುತ್ತಿರುವ ತಕ್ಷಕನನ್ನು ಕಂಡನು.

ಲಕ್ಷನಾಗೈಃ ಪರಿವೃತಂ ಶೈಲತುಲ್ಯಂ ವಿಷೋಲ್ಬಣಮ್
ಭೋಕ್ತುಂ ಕೋಪಾತ್ಸಮಾಯಾಂತಮೇವಂ ದೃಷ್ಟ್ವಾ ಜಹಾಸ ಚ ॥೪॥

ದಂಬೌ ಧನ್ವಂತರೇಃ ಶಿಷ್ಯೋ ಧೃತ್ವಾ ತಕ್ಷಕಮುಲ್ಬಣಂ ।
ಮಂತ್ರೇಣ ಜೃಂಭಿತಂ ಕೃತ್ವಾ ನಿರ್ವಿಷಂ ತಂ ಚಕಾರ ಹ ॥೫॥

ಅಮೂಲ್ಯಂ ಮಣಿರತ್ನಂ ಚ ಜಹಾರ ಮಸ್ತಕೇ ಸ್ಥಿತಮ್ ।
ಕರೇಣ ಭ್ರಾಮಯಿತ್ವಾ ಚ ಪ್ರೇರಯಾಮಾಸ ದೂರತಃ ॥೬॥

ನಿಶ್ಚೇಷ್ಟಸ್ತಕ್ಷ ಕಸ್ತಸ್ಥೌ ತತ್ರ ಮಾರ್ಗೇ ಯಥಾ ಮೃತಃ ।
ಗಣಾ ನಿವೇದನಂ ಚಕ್ರುರ್ಗತ್ವಾ ವಾಸುಕಿಸನ್ನಿಧಿಮ್ ॥೭॥

ವಾಸುಕಿಸ್ತತ್ಸಮಾಕರ್ಣ್ಯ ಪ್ರಜ್ವಲನ್ನತಿಕೋಪತಃ ।
ಸರ್ಪಾನ್ ಪ್ರಸ್ಥಾಪಯಾಮಾಸಾ ಸಂಖ್ಯಾಂಶ್ಚೈವ ವಿಷೋಲ್ಬಣಾನ್ ॥೮॥

೪. ಒಂದು ಲಕ್ಷ ಸರ್ಪಗಳೊಡನೆ ಕೂಡಿಕೊಂಡು ಪರ್ವತಕ್ಕೆ ಸಮಾನನಾಗಿ ಘೋರವಿಷದಿಂದ ಕೂಡಿ ಕೋಪದಿಂದ ತಿನ್ನಲು ಬರುತ್ತಿರುವ ಆ ಸರ್ಪನನ್ನು ನೋಡಿ ಧನ್ವಂತರಿಯು ನಕ್ಕನು.

೫. ಧನ್ವಂತರಿಯ ಶಿಷ್ಯರಲ್ಲೊಬ್ಬನು ಇದನ್ನು ನೋಡಿ ಮಹಾವಿಷವನ್ನು ಕಾರುತ್ತಿದ್ದ ಆ ತಕ್ಷಕನನ್ನು ಕೈಯಲ್ಲಿ ಹಿಡಿದುಕೊಂಡು ಮಂತ್ರದಿಂದ ಬಾಯಿಯನ್ನು ಅಗಲಿಸಿ ವಿಷವಿಲ್ಲದಂತೆ ಮಾಡಿದನು.

೬. ಮತ್ತು ತಲೆಯ ಮೇಲಿದ್ದ ಮಹಾಬೆಲೆಯುಳ್ಳ ರತ್ನಮಣಿಯನ್ನು ಅಪಹರಿಸಿದನು. ಅಲ್ಲದೆ ಅದನ್ನು ಕೈಯಲ್ಲಿ ಹಿಡಿದುಕೊಂಡು ತಿರುಗಿಸಿ ದೂರ ಬಿಸುಟನು.

೭. ತಕ್ಷಕನು ಅಲ್ಲಿಯೇ ದಾರಿಯಲ್ಲಿ ಅಲ್ಲಾಡದವನಾಗಿ ಸತ್ತವನಂತೆ ಬಿದ್ದನು. ಸರ್ಪಗಣಗಳು ವಾಸುಕಿಯ ಸಮೀಪಕ್ಕೆ ಹೋಗಿ ಸಮಾಚಾರವನ್ನು ತಿಳಿಸಿದುವು.

೮. ವಾಸುಕಿಯು ಆ ಸಮಾಚಾರವನ್ನು ಕೇಳಿ ಕೋಪದಿಂದ ಯುಕ್ತ, ಮಹಾವಿಷಗಳಿಂದ ಕೂಡಿದ ಲಕ್ಷವಿಲ್ಲದಷ್ಟು ಸರ್ಪಗಳನ್ನು ಕಳುಹಿದನು.

ಸರ್ಪಸೇನಾಗ್ರಣೀನಾಂ ಚ ಮುಖ್ಯಾನ್ಪಂಚ ವಿಶಾರದಾನ್ ।
ದ್ರೋಣಕಾಲೀಯಕರ್ಕೋಟಪುಂಡರೀಕ ಧನಂಜಯಾನ್ ॥೯॥

ಸರ್ವೇ ನಾಗಾಃ ಸಮಾಜಗ್ಮುರ್ಯತ್ರ ಧನ್ವಂತರಿಃ ಸ್ವಯಂ ।
ಭಯಮಾಪುಃ ಶಿಷ್ಯಗಣಾ ದೃಷ್ಟ್ವಾ ನಾಗಾನಸಂಖ್ಯಕಾನ್ ॥೧೦॥

ನಾಗನಿಶ್ವಾಸವಾತೇನ ಸರ್ವೇ ಶಿಷ್ಯಾ ಮೃತಾ ಇವ ।
ನಿಶ್ಚೇಷ್ಟಾ ಜ್ಞಾನರಹಿತಾಃ ಶೇರತೇ ಧರಣೀತಲೇ ॥೧೧॥

ಧನ್ವಂತರಿಶ್ಚ ಭಗವಾನ್ ಪೀಯೂಷವರ್ಷಣೇನ ಚ ।
ಜೀವಯಾಮಾಸ ಶಿಷ್ಯಾಂಶ್ಚ ಮಂತ್ರೇಣ ಚ ಗುರುಂ ಸ್ಮರನ್ ॥೧೨॥

ಚೇತನಾಂ ಕಾರಯಿತ್ವಾ ಚ ಶಿಷ್ಯಾಣಾಂ ಚ ಜಗದ್ಗುರುಃ ।
ಚಕಾರ ಜೃಂಭಿತಂ ಮಂತ್ರೈಃ ಸರ್ಪಸಂಘಂ ವಿಷೋಲ್ಬಣಮ್ ॥೧೩॥

೯. ಈ ಸರ್ಪಸೈನ್ಯಕ್ಕೆ ಮುಖ್ಯರೂ ನಿಪುಣರೂ ಆದ ದ್ರೋಣ ಕಾಲೀಯ ಕಾರ್ಕೋಟ, ಪುಂಡರೀಕ, ಧನಂಜಯರೆಂಬ ಐದು ಮಂದಿಯನ್ನು ಸೇನಾಪತಿಗಳನ್ನಾಗಿ ಮಾಡಿದನು.

೧೦. ಈ ಎಲ್ಲ ಸರ್ಪಗಳೂ ಯಾವ ಸ್ಥಳದಲ್ಲಿ ಧನ್ವಂತರಿಯಿದ್ದನೋ ಅಲ್ಲಿಗೆ ಬಂದುವು. ಧನ್ವಂತರಿಯ ಶಿಷ್ಯರು ಲೆಕ್ಕವಿಲ್ಲದಷ್ಟು ಸಂಖ್ಯೆಯಲ್ಲಿ ಬರುತ್ತಿರುವ ಸರ್ಪಗಳನ್ನು ನೋಡಿ ಬಹಳ ಭಯಗೊಂಡರು.

೧೧. ಈ ಸರ್ಪಗಳ ಉಸಿರಿನ, ಗಾಳಿಯಿಂದ ಎಲ್ಲ ಶಿಷ್ಯರೂ ಸತ್ತವರಂತೆ ಅಲುಗಾಡದೆ ಜ್ಞಾನವಿಲ್ಲದವರಾಗಿ ನೆಲದ ಮೇಲೆ ಮಲಗಿದರು.

೧೨. ಪೂಜ್ಯನಾದ ಧನ್ವಂತರಿಯು ಗುರುವನ್ನು ಸ್ಮರಿಸುತ್ತ ಮಂತ್ರವನ್ನು ಜಪಮಾಡಿ ಅಮೃತದ ಮಳೆಯನ್ನು ಕರೆದು ಆ ಶಿಷ್ಯರನ್ನು ಬದುಕಿಸಿದನು.

೧೩. ಜಗತ್ತಿಗೆ ಗುರುವಾದ ಆ ಧನ್ವಂತರಿಯು ತನ್ನ ಶಿಷ್ಯರೆಲ್ಲರಿಗೂ ಜ್ಞಾನವುಂಟಾಗುವಂತೆ ಮಾಡಿ ವಿಷದಿಂದ ಭಯಂಕರವಾದ ಸರ್ಪಸಮೂಹವನ್ನು ಮಂತ್ರದಿಂದ ಜ್ಞಾನಶೂನ್ಯವನ್ನಾಗಿ ಮಾಡಿದನು.

ಸರ್ವೇ ಬಭೂವುರ್ನಿಶ್ಚೇಷ್ಟಾ ಜೃಂಭಿತಾಸ್ಯೇ ಮೃತಾ ಇವ ।
ಕೋಽಪಿ ನಾಲಂ ತತೋ ದೇವಿ ವಾರ್ತಾಂ ದಾತುಂ ಗಣೇಷು ಚ ॥೧೪॥

ವಾಸುಕಿರ್ಬುಬುಧೇ ಸರ್ವಂ ಸರ್ವಜ್ಞಃ ಸರ್ವಸಂಕಟಂ ।
ಆಜುಹಾವ ಜಗದ್ಗೌರೀ ಭಗಿನೀಂ ಜ್ಞಾನರೂಪಿಣೀಂ ॥೧೫॥

॥ ವಾಸುಕಿರುವಾಚ ॥

ಮನಸೇ ತ್ವಂ ಸಮಾಗಚ್ಛ ನಾಗಾನ್ರಕ್ಷಾತಿಸಂಕಟಾತ್ ।
ಜಗತ್ತ್ರಯೇ ಮಹಾಭಾಗೇ ಪೂಜಾ ತವ ಭವಿಷ್ಯತಿ ॥೧೬॥

ವಾಸುಕೇರ್ವಚನಂ ಶ್ರುತ್ವಾ ಪ್ರಹಸ್ಯೋವಾಚ ಕನ್ಯಕಾ ।
ವಾಕ್ಯಂ ಪೀಯೂಷತುಲ್ಯಂ ಚ ವಿನಯಾವನತಸ್ಥಿತಾ ॥೧೭॥

೧೪. ಆ ಸರ್ಪಗಳೆಲ್ಲವೂ ಮಂತ್ರ ಪ್ರಭಾವದಿಂದ ಮೃತರಂತೆ ನಿಶ್ಚೇಷ್ಟರಾದರು. ಈ ಸರ್ಪಗಳ ಮಧ್ಯದಲ್ಲಿ ಒಬ್ಬನೂ ಕೂಡ ಸಮಾಚಾರವನ್ನು ವಾಸುಕಿಗೆ ಹೇಳಲು ಸಮರ್ಥನಾಗಿರಲಿಲ್ಲ.

೧೫. ಸರ್ವಜ್ಞನಾದ ವಾಸುಕಿಯು ಸರ್ಪಗಳಿಗೊದಗಿದ ದುಃಖವೆಲ್ಲವನ್ನು ತಿಳಿದುಕೊಂಡನು. ಅನಂತರ ಜಗನ್ಮಾತೆಯೂ, ಜ್ಞಾನರೂಪಿಣಿಯೂ ತನ್ನ ಸಹೋದರಿಯೂ ಆದ ಗೌರಿಯನ್ನು ಕರೆದನು.

೧೬. ವಾಸುಕಿಯು :— ಎಲೈ ಮನಸೆಯೇ, ನೀನು ಹೀಗೆ ಬಾ, ಸರ್ಪಗಳನ್ನು ಮಹಾಸಂಕಟದಿಂದ ಕಾಪಾಡುವವಳಾಗು. ಎಲೈ ಮಹಾತ್ಮಳೇ, ಇದರಿಂದ ನಿನಗೆ ಮೂರು ಲೋಕದಲ್ಲಿಯೂ ಪೂಜೆಯುಂಟಾಗುವುದು.

೧೭. ವಾಸುಕಿಯ ಮಾತನ್ನು ಕೇಳಿ ಆ ಕನ್ನಿಕೆಯು ನಗುತ್ತ, ವಿನಯದಿಂದ ಬಾಗಿಸಂತವಳಾಗಿ ಇದಕ್ಕೆ ಉಚಿತವಾದ ಮಾತನಾಡಿದಳು.

॥ ಮಾನಸೋವಾಚ ॥

ನಾಗೇಂದ್ರ ಶೃಣು ಮದ್ವಾಕ್ಯಂ ಯಾಸ್ಯಾಮಿ ಸಮರಂ ಪ್ರತಿ ।
ಭದ್ರಾಭದ್ರಂ ದೈವಸಾಧ್ಯಂ ಕರಿಷ್ಯಾಮಿ ಯಥೋಚಿತಮ್ ॥೧೮॥

ತಂ ಶತ್ರುಂ ಸಂಹರಿಷ್ಯಾಮಿ ಲೀಲಯಾ ಸಮರಸ್ಥಲೇ ।
ಅಹಂ ಯಂ ನಿಹನಿಷ್ಯಾಮಿ ತಂ ಕೋ ರಕ್ಷಿತುಮೀಶ್ವರಃ ॥೧೯॥

ಯದಿ ಬ್ರಹ್ಮಾದಯೋ ದೇವಾಃ ಸಮಾಯಾಂತಿ ರಣಸ್ಥಲೇ ।
ತಥಾಪಿ ತವ ಶತ್ರುಂ ಚ ಪ್ರಜೇಷ್ಯಾಮಿ ನ ಸಂಶಯಃ ॥೨೦॥

ಗುರುರ್ಮೇ ಭಗವಾಞ್ಛೇಷಃ ಸಿದ್ಧಮಂತ್ರಂ ಚ ದತ್ತವಾನ್ ।
ನಾರಾಯಣಸ್ಯ ಜಗತಾಮೀಶಸ್ಯ ಪರಮಾದ್ಭುತಮ್ ॥೨೧॥

ಬಿಭರ್ಮಿ ಕವಚಂ ಕಂಠೇ ಪರಂ ತ್ರೈಲೋಕ್ಯಮಂಗಲಮ್ ।
ಸಂಸಾರಂ ಭಸ್ಮಸಾತ್ ಕೃತ್ವಾ ಪುನಃ ಸ್ರಷ್ಟುಮಹಂ ಕ್ಷಮಾ ॥೨೨॥

೧೮. ಮನಸೆಯು :— ಎಲೈ ನಾಗೇಂದ್ರನೇ, ನನ್ನ ಮಾತನ್ನು ಕೇಳು. ನಾನು ಯುದ್ಧಕ್ಕೆ ಹೋಗುತ್ತೇನೆ. ಜಯಾಪಜಯಗಳು ದೈವಾಯತ್ತವಾಗಿರುವುವು. ನಾನು ನನ್ನ ಶಕ್ತಿಗನುಸಾರವಾಗಿ ಕೆಲಸವನ್ನು ಮಾಡುವೆನು.

೧೯. ಯುದ್ಧರಂಗದಲ್ಲಿ ಆ ಶತ್ರುವನ್ನು ಸುಲಭವಾಗಿ ಸಂಹಾರಮಾಡುವೆನ. ನಾನು ಯಾರನ್ನು ಸಂಹರಿಸುವೆನೋ ಅವನನ್ನು ರಕ್ಷಣೆಮಾಡಲು ಯಾವನು ಸಮರ್ಥನು?

೨೦. ಯುದ್ಧರಂಗದಲ್ಲಿ ಒಂದು ಪಕ್ಷ ಬ್ರಹ್ಮನೇ ಮೊದಲಾದ ದೇವತೆಗಳು ಬಂದರೂ ಕೂಡ ಆಗಲೂ ನನ್ನ ಶತ್ರುವನ್ನು ಖಂಡಿತವಾಗಿಯೂ ಜಯಿಸುವೆನು.

೨೧. ನನ್ನ ಗುರುವೂ ಪೂಜ್ಯನೂ ಆದ ಆದಿಶೇಷನು ಜಗತ್ತಿಗೆ ಹಿತಮನಾದ ನಾರಾಯಣನ ಆಶ್ಚರ್ಯಕರವಾದ ಮಂತ್ರವನ್ನು ನನಗೆ ಉಪದೇಶ ಮಾಡಿರುವನು.

೨೨. ಮೂರು ಲೋಕಕ್ಕೂ ಮಂಗಳವನ್ನುಂಟುಮಾಡುವ ಉತ್ತಮವಾದ ಕವಚವನ್ನು ಕತ್ತಿನಲ್ಲಿ ಧರಿಸಿರುವೆನು. ನಾನು ಈ ಜಗತ್ತನ್ನೇ ಸುಟ್ಟು ಬೂದಿಮಾಡಿ ಮತ್ತೆ ಸೃಷ್ಟಿಮಾಡಲು ಶಕ್ತನಾಗಿರುವೆನು.

ಶಿಷ್ಯಾಹಂ ಮಂತ್ರಶಾಸ್ತ್ರೇಷು ಶಂಭೋರ್ಭಗವತಃ ಪುರಾ ।
ಮಹಾಜ್ಞಾನಂ ದತ್ತವಾನ್ಸ ಮಹ್ಯಂ ಚ ಕೃಪಯಾ ವಿಭುಃ ॥೨೩॥

ಶಂಭೋಶ್ಚ ಶಿಷ್ಯೋ ಗರುಡೋ ಗಣಯಾಮಿ ನ ತಂ ಧ್ರುವಂ ।
ಧನ್ವಂತರಿಸ್ತಚ್ಛಿಷ್ಯಾಣಾಮೇಕಃ ಕಿಂ ಗಣಯಾಮಿ ತಂ ॥೨೪॥

ಇತ್ಯುಕ್ತ್ವಾ ಸಾ ಜಗಾಮೈಕಾ ತ್ಯಕ್ತ್ವಾ ನಾಗಗಣಾನ್ರುಷಾ ।
ಪ್ರಣಮ್ಯ ಶ್ರೀಹರಿಂ ಶಂಭುಂ ಶೇಷಂ ಚ ಹೃಷ್ಟಮಾನಸಾ ॥೨೫॥

ಯತ್ರ ಧನ್ವಂತರಿರ್ದೇವಃ ಪ್ರಸನ್ನವದನೇಕ್ಷಣಃ ।
ತತ್ರಾಜಗಾಮ ಸಾ ದೇವೀ ಕೋಪರಕ್ತೇಕ್ಷಣಾ ರುಷಾ ॥೨೬॥

ದೃಷ್ಟಿಮಾತ್ರೇಣ ಸರ್ವಾಂಶ್ಚ ಜೀವಯಾಮಾಸ ಸುಂದರೀ ।
ವಿಷದೃಷ್ಟ್ಯಾ ಶತ್ರುಶಿಷ್ಯಾನ್ನಿಶ್ಚೇಷ್ಟಾಂಶ್ಚ ಚಕಾರ ಹ ॥೨೭॥

೨೩. ಹಿಂದೆ ನಾನು ಮಂತ್ರಶಾಸ್ತ್ರವನ್ನು ಕಲಿಯುವುದಕ್ಕೋಸ್ಕರ ಪೂಜ್ಯನಾದ ಪರಮೇಶ್ವರ ಶಿಷ್ಯಳಾಗಿದ್ದೆನು. ವಿಭುವಾದ ಆ ಪರಮೇಶ್ವರನು ದಯೆಯಿಂದ ನನಗೆ ಉತ್ತಮವಾದ ಜ್ಞಾನವನ್ನು ಕೊಟ್ಟಿರುವನು.

೨೪. ಗರುಡನು ಪರಮೇಶ್ವರನ ಶಿಷ್ಯನು. ನಾನು ಅವನನ್ನು ಲೆಕ್ಕಿಸುವುದಿಲ್ಲ. ಧನ್ವಂತರಿಯು ಗರುಡನ ಶಿಷ್ಯರಲ್ಲೊಬ್ಬನು. ಅವನನ್ನು ಲೆಕ್ಕಿಸುವೆನೇ?

೨೫. ಹೀಗೆ ಹೇಳಿ ಆ ಮನಸೆಯು ಸರ್ಪಗಣವನ್ನು ಬಿಟ್ಟು ಶ್ರೀಹರಿಯನ್ನೂ ಪರಮೇಶ್ವರನನ್ನೂ ಶೇಷನನ್ನೂ ನಮಸ್ಕರಿಸಿ ಕೋಪದಿಂದ ಬಲ್ಲಳೇ ಹೊರಟಳು.

೨೬. ಕೋಪದಿಂದ ಕೆಂಪಾದ ಕಣ್ಣುಗಳುಳ್ಳ ಆ ದೇವಿಯು ಎಲ್ಲಿ ಪೂಜ್ಯನಾದ ಧನ್ವಂತರಿಯು ಸಮಾಧಾನಗೊಂಡ ಮುಖದಿಂದಿದ್ದನೋ ಅಲ್ಲಿಗೆ ಬಂದಳು.

೨೭. ಸುಂದರಿಯಾದ ಆ ದೇವಿಯು ತನ್ನ ನೋಟದಿಂದಲೇ ಸರ್ಪಗಳನ್ನೆಲ್ಲ ಬದುಕಿಸಿದಳು. ಮತ್ತು ವಿಷಮಯವಾದ ನೋಟವನ್ನು ಬೀರಿ ತನ್ನ ಶತ್ರುವಾದ ಧನ್ವಂತರಿಯ ಶಿಷ್ಯರನ್ನು ಜ್ಞಾನಶೂನ್ಯರಾಗಿ ಮಾಡಿದಳು.

ಧನ್ವಂತರಿಸ್ತು ಭಗವಾನ್ಮಂತ್ರಶಾಸ್ತ್ರವಿಶಾರದಃ ।
ಮಂತ್ರೇಣ ಯತ್ನಂ ಕೃತವಾನ್ನೋತ್ಥಾಪಯಿತುಮೀಶ್ವರಃ ॥೨೮॥

ದೃಷ್ಟ್ವಾ ಧನ್ವಂತರಿಂ ದೇವೀ ಪ್ರಹಾಸ್ಯೋವಾಚ ಸತ್ವರಂ ।
ಬಹೂಕ್ತಿಮರ್ಥಯುಕ್ತಾಂ ಚ ಸಾಹಂಕಾರಾಂ ಸುರೇಶ್ವರಿ ॥೨೯॥

॥ ಮನಸೋವಾಚ ॥

ಮಂತ್ರಾರ್ಥಂ ಮಂತ್ರಶಿಲ್ಪಂ ಚ ಮಂತ್ರಭೇದಂ ಮಹೌಷಧಂ ।
ವದ ಜಾನಾಸಿ ಕಿಂ ಸಿದ್ಧ ಶಿಷ್ಯೋಽಸಿ ಗರುಡಸ್ಯ ಚ ॥೩೦॥

ಅಹಂ ಚ ವೈನತೇಯಶ್ಚ ಶಿಷ್ಯೌ ಶಂಭೋಶ್ಚ ವಿಶ್ರುತೌ ।
ಸುಕಲ್ಪಕಾಲಂ ಸುಚಿರಮಹಂ ಧನ್ವಂತರೇ ಶೃಣು ॥೩೧॥

ಇತ್ಯುಕ್ತ್ವಾ ಸರಸಃ ಪದ್ಮಂ ಸಮಾನೀಯ ಜಗತ್ಪ್ರಸೂಃ ।
ಮಂತ್ರಸಂವಲಿತಂ ಕೃತ್ವಾ ಪ್ರೇರಯಾಮಾಸ ಕೋಪತಃ ॥೩೨॥

೨೮. ಮಂತ್ರಶಾಸ್ತ್ರ ನಿಪುಣನಾದ ಧನ್ವಂತರಿಯು ಮಂತ್ರದಿಂದ ಪ್ರಯತ್ನವನ್ನು ಮಾಡಿದನು. ಆದರೆ ಶಿಷ್ಯರನ್ನು ಮೇಲಕ್ಕೆಬ್ಬಿಸಲು ಸಾಧ್ಯವಾಗಲಿಲ್ಲ.

೨೯. ಎಲೈ ದೇವೇಶ್ವರಿಯಾದ ರಾಧೆಯೇ, ದೇವಿಯು ಧನ್ವಂತರಿಯನ್ನು ನೋಡಿ ನಗುತ್ತ, ಅರ್ಥದಿಂದ ಕೂಡಿದ ಮತ್ತು ಅಹಂಕಾರ ಪೂರ್ಣವಾದ ಮಾತನ್ನಾಡಿದಳು.

೩೦. ಮನಸೆಯು :— ಎಲೈ ಸಿದ್ಧನೇ, ನೀನು ಗರುಡನ ಶಿಷ್ಯನಾಗಿರುವಿ. ಆದುದರಿಂದ ಮಂತ್ರಗಳ ಅರ್ಥವನ್ನೂ, ಮಂತ್ರಗಳ ಕಲೆಯನ್ನೂ ಮಂತ್ರಗಳ ಭೇದವನ್ನೂ ತಿಳಿದಿರುವುದಾದರೆ ಹೇಳು.

೩೧. ಎಲೈ ಧನ್ವಂತರಿಯೇ, ಕೇಳು. ನಾನೂ ಗರುಡನೂ ಕೂಡ ಅನೇಕ ಕಲ್ಪಗಳವರೆಗೆ ಪರಮೇಶ್ವರನ ಶಿಷ್ಯರಾಗಿ ಪ್ರಸಿದ್ಧರಾಗಿದ್ದೆವು. ನಾನು ಬಹಳಕಾಲ ಶಿಷ್ಯಳಾಗಿದ್ದೆನು.

೩೨. ಜಗನ್ಮಾತೆಯಾದ ದೇವಿಯು ಈ ರೀತಿಯಾಗಿ ಹೇಳಿ ಸರೋವರದಿಂದೊಂದು ಕಮಲವನ್ನು ತಂದು ಮಂತ್ರಿಸಿ ಕೋಪದಿಂದ ಧನ್ವಂತರಿಯ ಮೇಲೆ ಬಿಟ್ಟಳು.

ದೃಷ್ಟ್ವಾಗತಂ ಪದ್ಮಪುಷ್ಪಂ ಜ್ವಲದಗ್ನಿಶಿಖೋಪಮಂ ।
(ಧನ್ವಂತರಿಶ್ಚ ನಿಃಶ್ವಾಸೈರ್ಭಸ್ಮಸಾತ್ತಚ್ಚಕಾರ ಹ) ॥೩೩॥

ತಚ್ಚ ಧನ್ವಂತರಿರ್ದೃಷ್ಟ್ವಾ ಸಮಂತ್ರರೇಣುಮುಷ್ಟಿನಾ ।
ಚಕಾರ ನಿಷ್ಫಲಂ ಭಸ್ಮ ತಾಂ ಪ್ರಹಸ್ಯಾವಲೀಲಯಾ ॥೩೪॥

ದೇವೀ ಜಗ್ರಾಹ ಶಕ್ತಿಂ ಚ ಗ್ರೀಷ್ಮಸೂರ್ಯಸಮಪ್ರಭಾಂ ।
ಮಂತ್ರಸಂವಲಿತಾಂ ಕೃತ್ವಾ ಪ್ರೇರಯಾಮಾಸ ತಂ ರಿಪುಂ ॥೩೫॥

ದೃಷ್ಟ್ವಾ ಜಾಜ್ವಲ್ಯಮಾನಾಂ ತಾಂ ಶಕ್ತಿಂ ಧನ್ವಂತರಿಃ ಸ್ವಯಂ ।
ವಿಷ್ಣುದತ್ತೇನ ಶೂಲೇನ ಸ ತು ಚಿಚ್ಛೇದ ಲೀಲಯಾ ॥೩೬॥

ತಾಂ ಚ ಶಕ್ತಿಂ ವೃಥಾ ದೃಷ್ಟ್ವಾ ಪ್ರಜಜ್ವಾಲೇಶ್ವರೀ ರುಷಾ ।
ಜಗ್ರಾಹ ನಾಗಪಾಶಂ ಚ ಘೋರಮವ್ಯರ್ಥಮುಲ್ಬಣಂ ॥೩೭॥

೩೩. ಧನ್ವಂತರಿಯು ತನ್ನೆದುರಾಗಿ ಬರುತ್ತಿರುವ, ಉರಿಯುತ್ತಿರುವ ಬೆಂಕಿಯ ಜ್ವಾಲೆಗೆ ಸಮನಾದ ಆ ಕಮಲದ ಹೂವನ್ನು ನೋಡಿ ಸಿಟ್ಟುಸಿರನ್ನು ಬಿಟ್ಟುದರಿಂದಲೇ ಅದನ್ನು ಬೂದಿಮಾಡಿದನು.

೩೪. ಆ ಬೂದಿಯೂ ಕೂಡ ವೇಗವಾಗಿ ಇವನೆಡೆಗೆ ಬರುತ್ತಿರುವುದನ್ನು ನೋಡಿ ಧನ್ವಂತರಿಯು ತಿರಸ್ಕಾರದಿಂದ ನಗುತ್ತ ಒಂದು ಮುಷ್ಟಿ ಮಣ್ಣನ್ನು ಮಂತ್ರಪೂರ್ವಕವಾಗಿ ಎಸೆದು ಆ ಬೂದಿಯನ್ನು ವ್ಯರ್ಥಮಾಡಿದನು.

೩೫. ದೇವಿಯು ಗ್ರೀಷ್ಮಕಾಲದ ಸೂರ್ಯನಂತೆ ಪ್ರಕಾಶಮಾನವಾದ ಶಕ್ತ್ಯಾಯುಧವನ್ನು ಕೈಗೆ ತೆಗೆದುಕೊಂಡು ಮಂತ್ರದಿಂದ ಅಭಿಮಂತ್ರಿಸಿ ಆ ಶತ್ರುವಿನ ಮೇಲೆ ಅದನ್ನೆಸೆದಳು.

೩೬. ಧನ್ವಂತರಿಯು ಉರಿಯುತ್ತ ಬರುತ್ತಿರುವ ಆ ಶಕ್ತ್ಯಾಯುಧವನ್ನು ನೋಡಿ ವಿಷ್ಣುವಿನಿಂದ ಕೊಡಲ್ಪಟ್ಟ ಶಕ್ತ್ಯಾಯುಧದಿಂದ ಸುಲಭವಾಗಿ ಆ ಶಕ್ತಿಯನ್ನು ಕತ್ತರಿಸಿದನು.

೩೭. ಆ ಶಕ್ತ್ಯಾಯುಧವು ವ್ಯರ್ಥವಾದುದನ್ನು ಕಂಡು ಕೋಪಪೂರಿತಳಾದಳು. ಮತ್ತು ಭಯಂಕರವಾಗಿಯೂ, ತೀಕ್ಷ್ಣವಾಗಿಯೂ ವ್ಯರ್ಥವಾಗದೇ ಇರುವುದೂ ಆದ ನಾಗಪಾಶವನ್ನು ಕೈಗೆ ತೆಗೆದುಕೊಂಡಳು.

ನಾಗಲಕ್ಷಸಮಾಯುಕ್ತಂ ಸಿದ್ಧಮಂತ್ರೇಣ ಮಂತ್ರಿತಂ ।
ಪ್ರೇರಯಾಮಾಸ ಕೋಪೇನ ಕಾಲಾಂತಕಸಮಪ್ರಭಂ ॥೩೮॥

ಧನ್ವಂತರಿರ್ನಾಗಪಾಶಂ ದೃಷ್ಟ್ವಾ ಚ ಸಸ್ಮಿತೋ ಮುದಾ ।
ಸಸ್ಮಾರ ಗರುಡಂ ತೂರ್ಣಮಾಜಗಾಮ ಖಗೇಶ್ವರಃ ॥೩೯॥

ಸರ್ಪಾಸ್ತ್ರಮಾಗತಂ ದೃಷ್ಟ್ವಾ ಗರುಡೋ ಹರಿವಾಹನಃ ।
ವಿಧಾಯ ಚಂಚುನಾ ಶೀಘ್ರಂ ಬುಭುಜೇ ಕ್ಷುಧಿತಶ್ಚಿರಂ ॥೪೦॥

ನಾಗಾಸ್ತ್ರಂ ನಿಷ್ಫಲಂ ದೃಷ್ಟ್ವಾ ಕೋಪರಕ್ತೇಕ್ಷಣಾ ಭೃಶಂ ।
ಜಗ್ರಾಹ ಭಸ್ಮಮುಷ್ಟಿಂ ಚ ಶಿವದತ್ತಾಂ ಪುರಾ ಪ್ರಿಯೇ ॥೪೧॥

ಭಸ್ಮಮುಷ್ಟಿಂ ಮಂತ್ರಪೂತಾಂ ದೃಷ್ಟ್ವಾ ಚ ಪ್ರೇರಿತಾಂ ಯಥಾ ।
ಪಕ್ಷವಾತೇನ ಚಿಕ್ಷೇಪ ಶಿಷ್ಯಂ ಪಶ್ಚಾನ್ನಿಧಾಯ ಚ ॥೪೨॥

೩೮. ಲಕ್ಷ ಸರ್ಪಗಳಿಂದ ಕೂಡಿದ ಪ್ರಳಯಕಾಲದ ಯಮನಿಗೆ ಸಮನಾದ ಆ ನಾಗಪಾಶವನ್ನು ಸಿದ್ಧಮಂತ್ರದಿಂದ ಅಭಿಮಂತ್ರಿಸಿ ಕೋಪದಿಂದೆಸೆದಳು.

೩೯. ಧನ್ವಂತರಿಯು ನಾಗಪಾಶವನ್ನು ನೋಡಿ ಸಂತೋಷದಿಂದ ನಗುತ್ತ ಗರುಡನನ್ನು ಸ್ಮರಿಸಿದನು. ಆ ಕ್ಷಣವೇ ಗರುಡನು ಅಲ್ಲಿಗೆ ಬಂದನು.

೪೦. ಸಮೀಪಕ್ಕೆ ಬರುತ್ತಿರುವ ಸರ್ಪಾಸ್ತ್ರವನ್ನು ಕಂಡು ಹರಿಯ ವಾಹನನಾದ ಗರುಡನು ಕೊಕ್ಕಿನಿಂದ ಅವುಗಳನ್ನು ಬೇಗ ಕಚ್ಚಿಕೊಂಡು, ಬಹಳ ಹಸಿವಿನಿಂದ ಕೂಡಿವನಾದಕಾರಣ ಸಾವಕಾಶವಾಗಿ ತಿಂದನು.

೪೧. ಎಲೈ ಪ್ರಿಯಳೇ, ಸರ್ಪಾಸ್ತ್ರವು ನಿಷ್ಫಲವಾದುದನ್ನು ಕಂಡು ದೇವಿಯು ಕೋಪದಿಂದ ಕೆಂಪಾದ ಕಣ್ಣುಳ್ಳವಳಾಗಿ ಹಿಂದೆ ಈಶ್ವರನು ಕೊಟ್ಟಿದ್ದ ಬೂದಿಯ ಮುಷ್ಟಿಯನ್ನು ತೆಗೆದುಕೊಂಡಳು.

೪೨. ಗರುಡನು ಬೂದಿಯ ಮುಷ್ಟಿಯನ್ನು ಮಂತ್ರಿಸಿ ಬಿಟ್ಟಿರುವುದನ್ನು ಕಂಡು ತನ್ನ ಶಿಷ್ಯನನ್ನು ಹಿಂದೆ ನಿಲ್ಲಿಸಿಕೊಂಡು ತನ್ನ ರೆಕ್ಕೆಯ ಗಾಳಿಯಿಂದ ಆ ಬೂದಿಯನ್ನು ಹಾರಿಸಿದನು.

ನಿರಸ್ತಾಂ ಭಸ್ಮಮುಷ್ಟಿಂ ಚ ದೃಷ್ಟ್ವಾ ದೇವೀ ಚುಕೋಪ ಹ ।
ಜಗ್ರಾಹ ಶೂಲಮವ್ಯರ್ಥಂ ಹಂತುಂ ಧನ್ವಂತರಿಂ ಸ್ವಯಂ ॥೪೩॥

ಶಿವದತ್ತಂ ಚ ಶೂಲಂ ಚ ಶತಸೂರ್ಯಸಮಪ್ರಭಂ ।
ಅವ್ಯರ್ಥಶೂಲಂ ಲೋಕೇಷು ಪ್ರಲಯಾಗ್ನಿ ಸಮಪ್ರಭಂ ॥೪೪॥

ಅಥ ಬ್ರಹ್ಮಾ ತಥಾ ಶಂಭುರಾಜಗಾಮ ರಣಾಜಿರಂ ।
ಧನ್ವಂತರೇಶ್ಚ ರಕ್ಷಾರ್ಥಂ ಶಮನಾರ್ಥಂ ಖಗಸ್ಯ ಚ ॥೪೫॥

ದೃಷ್ಟ್ವಾ ಶಂಭುಂ ಜಗದ್ಗೌರೀ ವಿಧಿಂ ಚ ಜಗತಾಂ ಪತಿಂ ।
ಭಕ್ತ್ಯಾ ನನಾಮ ತಾವೇವ ನಿಃಶಂಕಾ ಶೂಲಧಾರಿಣೀ ॥೪೬॥

೪೩. ದೇವಿಯು ತಾನು ಪ್ರಯೋಗಿಸಿದ ಬೂದಿಯ ಮುಷ್ಟಿಯು ವ್ಯರ್ಥವಾದುದನ್ನು ಕಂಡು ಅತ್ಯಂತ ಕೋಪಗೊಂಡು ಎಂದೂ ವ್ಯರ್ಥವಾಗದ ಶೂಲಾಯುಧವನ್ನು ಕೈಗೆ ತೆಗೆದುಕೊಂಡಳು.

೪೪. ಈಶ್ವರನಿಂದ ಕೊಡಲ್ಪಟ್ಟ ಆ ಶೂಲಾಯುಧವು ನೂರುಮಂದಿ ಸೂರ್ಯರಿಗೆ ಸಮಾನವಾದ ಕಾಂತಿಯುಳ್ಳದ್ದು ಮತ್ತು ಲೋಕಗಳಲ್ಲಿ ಯಾವಾಗಲೂ ವ್ಯರ್ಥವಾಗದೆ ಸಫಲವಾಗಿದ್ದುದು, ಪ್ರಳಯಕಾಲದ ಬೆಂಕಿಯ ಜ್ವಾಲೆಗೆ ಸಮನಾದುದು.

೪೫. ಅನಂತರ ಬ್ರಹ್ಮನೂ ಮತ್ತು ಈಶ್ವರನೂ ಕೂಡ ಧನ್ವಂತರಿಯನ್ನು ಕಾಪಾಡುವುದಕ್ಕಾಗಿಯೂ ಗರುಡನನ್ನು ಸಮಾಧಾನಪಡಿಸುವುದಕ್ಕಾಗಿಯೂ ಯುದ್ಧ ಭೂಮಿಗೆ ಬಂದರು.

೪೬. ಜಗದ್ಗೌರಿಯು ಜಗತ್ತಿಗೆ ಒಡೆಯನಾದ ಬ್ರಹ್ಮನನ್ನೂ ಈಶ್ವರನನ್ನೂ ನೋಡಿ ಶೂಲಾಯುಧವನ್ನು ಹಿಡಿದುಕೊಂಡವಳಾಗಿಯೇ ಧೈರ್ಯದಿಂದ ಮುಂದೆ ಬಂದು ಭಕ್ತಿಯಿಂದ ಅವರಿಬ್ಬರಿಗೂ ನಮಸ್ಕಾರ ಮಾಡಿದಳು.

ಧನ್ವಂತರಿಶ್ಚ ಗರುಡಃ ಪ್ರಣನಾಮ ಸುರೇಶ್ವರೌ ।
ತುಷ್ಟಾವ ಪರಯಾ ಭಕ್ತ್ಯಾ ತೌ ಚ ಚಕ್ರತುರಾಶಿಷಂ ||೪೭||

ಉವಾಚ ಬ್ರಹ್ಮಾ ಮಧುರಂ ಹಿತಂ ಧನ್ವಂತರಿಂ ಮುದಾ ।
ಪೂಜಾರ್ಥಂ ಮನಸಾಯಾಶ್ಚ ಲೋಕಾನಾಂ ಹಿತಕಾಮ್ಯಯಾ ||೪೮||

|| ಬ್ರಹ್ಮೋವಾಚ ||

ಧನ್ವಂತರೇ ಮಹಾಭಾಗ ಸರ್ವಶಾಸ್ತ್ರವಿಶಾರದ ।
ರಣಂ ತೇ ಮನಸಾಸಾರ್ಧಂ ನ ಹಿ ಸಾಮ್ಯಂ ಚ ಮೇ ಮತಂ ||೪೯||

ಶಿವದತ್ತೇನ ಶೂಲೇನ ದುರ್ನಿವಾರ್ಯೇಣ ಸರ್ವತಃ ।
ತ್ರೈಲೋಕ್ಯಂ ಭಸ್ಮಸಾತ್ಕರ್ತುಂ ಕ್ಷಮೇಯಂ ತ್ರಿದಶೇಶ್ವರೀ ||೫೦||

ಧ್ಯಾನಂ ಕೌಥುಮಶಾಖೋಕ್ತಂ ಕೃತ್ವಾ ಭಕ್ತ್ಯಾ ಸಮಾಹಿತಃ ।
ದತ್ವಾ ಷೋಡಶೋಪಚಾರಂ ದೇವ್ಯಾಶ್ಚ ಕುರು ಪೂಜನಂ ||೫೧||

೪೭. ಧನ್ವಂತರಿಯೂ ಗರುಡನೂ ಕೂಡ ದೇವೇಶ್ವರನಾದ ಆ ಬ್ರಹ್ಮ ಮಹೇಶ್ವರರಿಗೆ ನಮಸ್ಕಾರ ಮಾಡಿದರು. ಮತ್ತು ಅತಿಭಕ್ತಿಯಿಂದ ಸ್ತೋತ್ರ ಮಾಡಿದರು. ಆ ಬ್ರಹ್ಮಮಹೇಶ್ವರರು ಆಶೀರ್ವಾದಗಳನ್ನು ಮಾಡಿದರು.

೪೮. ಬ್ರಹ್ಮನು ಜಗತ್ತಿಗೆ ಹಿತವನ್ನುಂಟುಮಾಡುವ ಅಪೇಕ್ಷೆಯಿಂದ ಸಂತೋಷಗೊಂಡವನಾಗಿ ಧನ್ವಂತರಿಯನ್ನು ಕುರಿತು ಮನಸಾದೇವಿಯನ್ನು ಪೂಜೆಮಾಡುವಂತೆ ಹಿತವಾಗಿಯೂ ಇಂಪಾಗಿಯೂ ಇರುವ ಮಾತನಾಡಿದನು.

೪೯. ಸಕಲಶಾಸ್ತ್ರನಿಪುಣನೂ, ಮಹಾತ್ಮನೂ ಆದ ಎಲೈ ಧನ್ವಂತರಿಯೇ, ನೀನು ಮನಸೆಯೊಡನೆ ಯುದ್ಧಮಾಡುವುದು ಸಮನಲ್ಲವೆಂದು ನನ್ನ ಅಭಿಪ್ರಾಯವು.

೫೦. ಈ ದೇವೇಶ್ವರಿಯು ತಡೆಯಲಸಾಧ್ಯವಾದ, ಈಶ್ವರನಿಂದ ಕೊಡಲ್ಪಟ್ಟ ಶೂಲಾಯುಧದಿಂದ ಮೂರು ಲೋಕವನ್ನೂ ಸುಟ್ಟು ಬೂದಿಮಾಡಲು ಶಕ್ತಳು.

೫೧. ಕೌಥುಮಶಾಖೆಯಲ್ಲಿ ಹೇಳಿರುವ ಪ್ರಕಾರ ಧ್ಯಾನವನ್ನು ಮಾಡಿ ಭಕ್ತಿಯಿಂದ ಸಮಾಧಾನ ಹೊಂದಿದ ಮನಸ್ಸುಳ್ಳವನಾಗಿ ಷೋಡಶೋಪಚಾರಗಳನ್ನು ಅರ್ಪಣೆಮಾಡಿ ಈ ದೇವಿಯನ್ನು ಪೂಜೆಮಾಡು.

ಆಸ್ತಿಕೋಕ್ತೇನ ಸ್ತೋತ್ರೇಣ ಸ್ತವನಂ ಕರ್ತುಮರ್ಹಸಿ ।
ಪರಿತುಷ್ಟಾ ಚ ಮನಸಾ ವರಂ ತುಭ್ಯಂ ಪ್ರದಾಸ್ಯತಿ ॥೫೨॥

ಬ್ರಹ್ಮಣೋ ವಚನಂ ಶ್ರುತ್ವಾ ಚಕಾರಾನುಮತಿಂ ಶಿವಃ ।
ವೈನತೇಯಶ್ಚ ಸಂಪ್ರೀತ್ಯಾ ಬೋಧಯಾಮಾಸ ಯತ್ನತಃ ॥೫೩॥

ಏಷಾಂ ಚ ವಚನಂ ಶ್ರುತ್ವಾ ಸ್ನಾತ್ವಾ ಶುಚಿರಲಂಕೃತಃ ।
ವಿಧಿಂ ಪುರೋಹಿತಂ ಕೃತ್ವಾ ಪೂಜಾಂ ಕರ್ತುಂ ಸಮುದ್ಯತಃ ॥೫೪॥

॥ ಧನ್ವಂತರಿರುವಾಚ ॥

ಇಹಾಗಚ್ಛ ಜಗದ್ಗೌರಿ ಗೃಹಾಣ ಮಮ ಪೂಜನಂ ।
ಪೂಜ್ಯಾ ತ್ವಂ ತ್ರಿಷು ಲೋಕೇಷು ಪುರಾ ಕಶ್ಯಪಕನ್ಯಕೇ ॥೫೫॥

ತ್ವಯಾ ಜಿತಂ ಜಗತ್ಸರ್ವಂ ದೇವಿ ವಿಷ್ಣುಸ್ವರೂಪಯಾ ।
ತೇನ ತೇಽಸ್ತ್ರ ಪ್ರಯೋಗಶ್ಚ ನ ಕೃತೋ ರಣಭೂಮಿಷು ॥೫೬॥

೫೨. ಮತ್ತು ಆಸ್ತೀಕನು ಹೇಳಿದ ಸ್ತೋತ್ರದಿಂದ ಸ್ತೋತ್ರವನ್ನು ಮಾಡು. ಅದರಿಂದ ಸಂತೋಷವನ್ನು ಹೊಂದಿದ ಮನಸಾದೇವಿಯು ನಿನಗೆ ವರವನ್ನು ಕೊಡುವಳು.

೫೩. ಬ್ರಹ್ಮನ ಮಾತನ್ನು ಕೇಳಿ ಈಶ್ವರನೂ ಅನುಮತಿಸಿದನು. ಗರುಡನೂ ಕೂಡ ಪ್ರೀತಿಯಿಂದ ಈ ಧನ್ವಂತರಿಯನ್ನು ಕುರಿತು ಬೋಧನೆ ಮಾಡಿದನು.

೫೪. ಇವರುಗಳ ಮಾತನ್ನು ಕೇಳಿ ಧನ್ವಂತರಿಯು ಸ್ನಾನಮಾಡಿ ಪರಿಶುದ್ಧನಾಗಿ ಅಲಂಕಾರ ಮಾಡಿಕೊಂಡು ಬ್ರಹ್ಮನನ್ನು ಪುರೋಹಿತನನ್ನಾಗಿ ಮಾಡಿಕೊಂಡು ಮನಸಾದೇವಿಯನ್ನು ಪೂಜಿಸಲು ತೊಡಗಿದನು.

೫೫. ಧನ್ವಂತರಿಯು:— ಪೂರ್ವದಲ್ಲಿ ಕಶ್ಯಪನ ಮಗಳಾಗಿದ್ದ ಎಲೈ ಜಗದ್ಗೌರಿಯೇ, ನೀನು ಮೂರು ಲೋಕಗಳಲ್ಲಿಯೂ ಪೂಜ್ಯಳಾಗಿರುವೆ. ಹೀಗೆ ಬಾ. ಈ ನನ್ನ ಪೂಜೆಯನ್ನು ಸ್ವೀಕರಿಸುವವಳಾಗು.

೫೬. ಎಲೈ ದೇವಿಯೇ, ವಿಷ್ಣುರೂಪಳಾದ ನಿನ್ನಿಂದ ಸಕಲ ಜಗತ್ತೂ ವ್ಯಾಪಿಸಲ್ಪಟ್ಟಿದೆ. ಆದಕಾರಣ ಯುದ್ಧರಂಗದಲ್ಲಿ ನಿನ್ನೊಡನೆ ವಾದ್ಯಪ್ರಯೋಗ ಮಾಡಲಿ.

ಇತ್ಯುಕ್ತ್ವಾ ಸಂಯತೋ ಭೂತ್ವಾ ಭಕ್ತಿನಮ್ರಾತ್ಮಕಂಧರಃ ।
ಗೃಹೀತ್ವಾ ಶುಕ್ಲಕುಸುಮಂ ಧ್ಯಾನಂ ಕರ್ತುಂ ಸಮುದ್ಯತಃ ॥೫೭॥

ಚಾರಚಂಪಕವರ್ಣಾಭಾಂ ಸರ್ವಾಂಗಸುಮನೋಹರಾಂ ।
ಈಷದ್ಧಾಸ್ಯಪ್ರಸನ್ನಾಸ್ಯಾಂ ಶೋಭಿತಾಂ ಸೂಕ್ಷ್ಮವಾಸಸಾ ॥೫೮॥

ಸುಚಾರುಕಬರೀಶೋಭಾಂ ರತ್ನಾಭರಣಭೂಷಿತಾಂ ।
ಸರ್ವಾಭಯಪ್ರದಾಂ ದೇವೀಂ ಭಕ್ತಾನುಗ್ರಹಕಾತರಾಂ ॥೫೯॥

ಸರ್ವವಿದ್ಯಪ್ರದಾಂ ಶಾಂತಾಂ ಸರ್ವವಿದ್ಯಾವಿಶಾರದಾಂ ।
ನಾಗೇಂದ್ರವಾಹಿನೀಂ ದೇವೀಂ ಭಜೇ ನಾಗೇಶ್ವರೀಂ ಪರಾಂ ॥೬೦॥

ಧ್ಯಾತ್ವೈವಂ ಕುಸುಮಂ ದತ್ವಾ ನಾನಾದ್ರವ್ಯಸಮನ್ವಿತಂ ।
ದತ್ವಾ ಷೋಡಶೋಪಚಾರಂ ಪೂಜಯಾಮಾಸ ತಾಂ ಪ್ರಿಯೇ ॥೬೧॥

೫೭. ಹೀಗೆ ಹೇಳಿ ಸಮಾಧಾನಗೊಂಡವನಾಗಿ ಭಕ್ತಿಯಿಂದ ಬಾಗಿದ ಕತ್ತುಳ್ಳವನಾಗಿ ಬಿಳಿಯ ಹೂವನ್ನು ತೆಗೆದುಕೊಂಡು ಧ್ಯಾನಮಾಡಲುಪಕ್ರಮಿಸಿದನು.

೫೮ —೬೦. ಮನೋಹರವಾದ ಸಂಪಿಗೆಯ ಹೂವಿನಂತೆ ಮೈಬಣ್ಣವುಳ್ಳ, ಸಕಲಶರೀರಗಳಿಂದಲೂ ಮನೋಹರಳಾದ, ಸ್ವಲ್ಪ ನಗುವಿನಿಂದ ನಿರ್ಮಲವಾದ ಮುಖವುಳ್ಳ, ಸೂಕ್ಷ್ಮವಾದ ವಸ್ತ್ರದಿಂದ ಪ್ರಕಾಶಮಾನಳಾದ, ಮನೋಹರವಾದ ಜಡೆಯಿಂದ ಶೋಭಿತಳಾದ, ರತ್ನಮಯವಾದ ಆಭರಣಗಳಿಂದ ಅಲಂಕೃತಳಾದ, ಸಕಲರಿಗೂ ಅಭಯವನ್ನು ಕೊಡುವ, ಭಕ್ತರಮೇಲೆ ಅನುಗ್ರಹಮಾಡಲು ನಿರತಳಾದ, ಸಕಲ ವಿದ್ಯೆಗಳನ್ನೂ ಕೊಡುವ, ಸಕಲ ವಿದ್ಯೆಗಳಲ್ಲಿಯೂ ನಿಪುಣಳಾದ, ಶಾಂತರೂಪಳಾದ, ಆನೆಯಮೇಲೆ ಪ್ರಯಾಣಮಾಡುವ, ನಾಗಗಳಿಗೆ ಒಡೆಯಳಾದ ಉತ್ತಮಳಾದ ದೇವಿಯನ್ನು ನಾನು ಭಜಿಸುವೆನು.

೬೧. ಎಲೈ ಪ್ರಿಯಳೇ, ಈ ಪ್ರಕಾರ ಧ್ಯಾನಮಾಡಿ ನಾನಾ ದ್ರವ್ಯಗಳಿಂದ ಕೂಡಿದ ಪುಷ್ಪಗಳನ್ನು ಸಮರ್ಪಿಸಿ ಆ ದೇವಿಯನ್ನು ಷೋಡಶೋಪಚಾರ ವಿಧಿಯಿಂದ ಪೂಜಿಸಿದನು.

ಸ್ತೋತ್ರಂ ಚಕಾರ ಯತ್ನಾಚ್ಚ ಪುಲಕಾಂಚಿತವಿಗ್ರಹಃ ।
ಪುಟಾಂಜಲಿಯುತೋ ಭೂತ್ವಾ ಭಕ್ತಿನಮ್ರಾತ್ಮಕಂಧರಃ ॥೬೨॥

## ಧನ್ವಂತರಿ ಪ್ರೋಕ್ತ ಮನಸಾದೇವಿ ಸ್ತೋತ್ರ

ನಮಃ ಸಿದ್ಧಿಸ್ವರೂಪಾಯ್ಯೈ ಸಿದ್ಧಿದಾಯ್ಯೈ ನಮೋ ನಮಃ ॥
ನಮಃ ಕಶ್ಯಪಕನ್ಯಾಯ್ಯೈ ವರದಾಯ್ಯೈ ನಮೋ ನಮಃ ॥೬೩॥

ನಮಃ ಶಂಕರಕನ್ಯಾಯ್ಯೈ ಶಂಕರಾಯ್ಯೈ ನಮೋ ನಮಃ ।
ನಮಸ್ತೇ ನಾಗವಾಹಿನ್ಯೈ ನಾಗೇಶ್ವರ್ಯೈ ನಮೋ ನಮಃ ॥೬೪॥

ನಮಃ ಆಸ್ತೀಕಜನನಿ ಜನನ್ಯೈ ಜಗತಾಂ ಮಮ ।
ನಮೋ ಜಗತ್ಕಾರಣಾಯ್ಯೈ ಜರತ್ಕಾರುಸ್ತ್ರಿಯ್ಯೈ ನಮಃ ॥೬೫॥

೬೨. ಎರಡು ಕೈಗಳನ್ನೂ ಜೋಡಿಸಿಕೊಂಡು ಭಕ್ತಿಪೂರ್ವಕವಾಗಿ ತಲೆಯನ್ನು ಬಾಗಿಸಿಕೊಂಡು ರೋಮಾಂಚಗೊಂಡ ಶರೀರವುಳ್ಳವನಾಗಿ ಪ್ರಯತ್ನಪೂರ್ವಕವಾಗಿ ಸ್ತೋತ್ರಮಾಡಲುಪಕ್ರಮಿಸಿದನು.

೬೩. ಧನ್ವಂತರಿಯು:— ಸಿದ್ಧಿಸ್ವರೂಪಿಣಿಯಾದ ನಿನಗೆ ನಮಸ್ಕಾರವು. ಸಕಲೇಷ್ಟಾರ್ಥ ಸಿದ್ಧಿಯನ್ನುಂಟುಮಾಡುವ ನಿನಗೆ ನಮಸ್ಕಾರವು. ಕಶ್ಯಪಬ್ರಹ್ಮನ ಪುತ್ರಿಯಾದ ನಿನಗೆ ನಮಸ್ಕಾರವು. ಭಕ್ತರಿಗೆ ವರಗಳನ್ನು ಕೊಡುವ ನಿನಗೆ ನಮಸ್ಕಾರವು.

೬೪. ಶಂಕರನ ಕನ್ಯೆಯೂ, ಶಂಕರ ರೂಪಿಣಿಯೂ ಆದ ನಿನಗೆ ನಮಸ್ಕಾರವು. ಆನೆಯ ವಾಹನವುಳ್ಳವಳೂ ಸರ್ಪಗಳಿಗೆ ಈಶ್ವರಿಯೂ ಆದ ನಿನಗೆ ನಮಸ್ಕಾರವು.

೬೫. ಆಸ್ತೀಕಮುನಿಯ ತಾಯಿಯೂ, ಸಕಲ ಜಗತ್ತಿಗೂ ನನಗೂ ತಾಯಿಯಾದ ನಿನಗೆ ನಮಸ್ಕಾರವು. ಸಕಲ ಜಗತ್ತಿಗೆ ಕಾರಣಳೂ, ಚಮತ್ಕಾರ ಶಕ್ತಿಯೂ ಆದ ನಿನಗೆ ನಮಸ್ಕಾರವು.

ನಮೋ ನಾಗಭಗಿನ್ಯೈ ಚ ಯೋಗನ್ಯೈ ಚ ನಮೋ ನಮಃ ।
ನಮಶ್ಚಿರಂ ತಪಸ್ವಿನ್ಯೈ ಸುಖದಾಯ್ಯೈ ನಮೋ ನಮಃ ||೧೬||

ನಮಸ್ತಪಸ್ಯಾರೂಪಾಯ್ಯೈ ಫಲದಾಯ್ಯೈ ನಮೋ ನಮಃ ।
ಸುಶೀಲಾಯ್ಯೈ ಚ ಸಾಧ್ವ್ಯೈ ಚ ಶಾಂತಾಯ್ಯೈ ಚ ನಮೋ ನಮಃ ||೧೭||

ಇತ್ಯೇವಮುಕ್ತ್ವಾ ಭಕ್ತ್ಯಾ ಚ ಪ್ರಣನಾಮ ಪ್ರಯತ್ನ ತಃ ।
ತುಷ್ಟಾ ದೇವೀ ವರಂ ದತ್ವಾ ಸತ್ವರಂ ಸ್ವಾಲಯಂ ಯಯೌ ||೧೮||

ಬ್ರಹ್ಮರುದ್ರವೈನತೇಯಾಃ ಸಮಾಜಗ್ಮುರ್ನಿಜಾಲಯಂ ।
ಧನ್ವಂತರಿಶ್ಚ ಭಗವಾನ್ ಜಗಾಮ ನಿಜಮಂದಿರಂ ||೧೯||

ಜಗ್ಮುರ್ನಾಗಾಃ ಪ್ರಹೃಷ್ಟಾಶ್ಚ ಫಣಾರಾಜಿವಿರಾಜಿತಾಃ ।
ಇತ್ಯೇವಂ ಕಥಿತಂ ಸರ್ವಂ ಸ್ತವರಾಜಂ ಮಯಾ ತವ ||೨೦||

೬೬. ಸರ್ಪಸಹೋದರಿಯೂ, ಯೋಗಿನಿಯೂ ಆದ ನಿನಗೆ ನಮಸ್ಕಾರವು. ಬಹುಕಾಲ ತಪಸ್ಸನ್ನು ಮಾಡಿದವಳೂ ಸುಖವನ್ನು ಕೊಡುವವಳೂ ಆದ ನಿನಗೆ ನಮಸ್ಕಾರವು.

೬೭. ತಪೋರೂಪಳೂ, ತಪಸ್ಸಿನ ಫಲವನ್ನು ಕೊಡುವವಳೂ ಆದ ನಿನಗೆ ನಮಸ್ಕಾರವು. ಒಳ್ಳೆಯ ಸ್ವಭಾವವುಳ್ಳವಳೂ, ಪತಿವ್ರತೆಯೂ, ಶಾಂತಸ್ವಭಾವವುಳ್ಳವಳೂ ಆದ ನಿನಗೆ ನಮಸ್ಕಾರವು.

೬೮. ಈ ರೀತಿಯಾಗಿ ಸ್ತೋತ್ರಮಾಡಿ ಧನ್ವಂತರಿಯು ಭಕ್ತಿಯಿಂದ ನಮಸ್ಕಾರವನ್ನು ಮಾಡಿದನು. ಸಂತೋಷಗೊಂಡ ದೇವಿಯು ವರವನ್ನು ಕೊಟ್ಟು ಶೀಘ್ರವಾಗಿ ತನ್ನ ಮನೆಗೆ ಹೊರಟುಹೋದಳು.

೬೯. ಬ್ರಹ್ಮ, ರುದ್ರ ಮತ್ತು ಗರುಡ ಇವರು ತಮ್ಮ ತಮ್ಮ ಮನೆಗೆ ಬಂದರು. ಪೂಜ್ಯನಾದ ಧನ್ವಂತರಿಯು ತನ್ನ ಮನೆಯನ್ನು ಕುರಿತು ಹೊರಟುಹೋದನು.

೭೦. ಸರ್ಪಗಳೆಲ್ಲವೂ ಸಂತೋಷಗೊಂಡು ತಮ್ಮ ತಮ್ಮ ಹೆಡೆಗಳಿಂದ ಪ್ರಕಾಶಿಸುತ್ತ ಹೊರಟುಹೋದವು. ಹೀಗೆ ಸಕಲ ವಿಚಾರವನ್ನೂ ಸ್ತೋತ್ರ, ಶ್ರೇಷ್ಠವನ್ನೂ ನಿನಗೆ ಹೇಳಿರುವೆನು.

ವಿಧಿನಾ ಮಾತರಂ ಭಕ್ತಿಮಾಸ್ತೀಕಶ್ಚ ಚಕಾರ ಹ ।
ತದಾ ತುಷ್ಟಾ ಜಗದ್ಗೌರೀ ಪುತ್ರಂ ತಂ ಮುನಿಪುಂಗವಂ ॥೭೧॥

ಇದಂ ಸ್ತೋತ್ರಂ ಮಹಾಪುಣ್ಯಂ ಭಕ್ತಿಯುಕ್ತಶ್ಚ ಯಃ ಪಠೇತ್ ।
ವಂಶಜಾನಾಂ ನಾಗಭಯಂ ನಾಸ್ತಿ ತಸ್ಯ ನ ಸಂಶಯಃ ॥೭೨॥

ಇತಿ ಶ್ರೀ ಬ್ರಹ್ಮವೈವರ್ತೇ ಮಹಾಪುರಾಣೇ ಶ್ರೀಕೃಷ್ಣಜನ್ಮಖಂಡೇ

ನಾರದನಾರಾಯಣಸಂವಾದೇ ಧನ್ವಂತರಿದರ್ಪಭಂಗೋ

ನಾಮ ಮನಸಾವಿಜಯೋ ನಾಮೈಕ

ಪಂಚಾಶತ್ತಮೋಽಧ್ಯಾಯಃ

೨೧. ಆಸ್ತೀಕಮುನಿಯೂ ಕೂಡ ನಿಯಮಪೂರ್ವಕವಾಗಿ ತಾಯಿಯನ್ನು ಭಕ್ತಿಯಿಂದ ಪೂಜಿಸಿದನು. ಆಗ ಜಗದ್ಗೌರಿಯು ಮುನಿಗಳಲ್ಲಿ ಶ್ರೇಷ್ಠನಾದ ತನ್ನ ಮಗನನ್ನು ಸಂತೋಷದಿಂದ ಮೆಚ್ಚಿದಳು.

೨೨. ಅತ್ಯಂತ ಪುಣ್ಯದಾಯಕವಾದ ಈ ಸ್ತೋತ್ರವನ್ನು ಯಾವ ಮನುಷ್ಯನು ಭಕ್ತಿಯಿಂದ ಪಠನಮಾಡುವನೋ ಅವನ ವಂಶದಲ್ಲಿ ಹುಟ್ಟಿದವರಿಗೆ ಸರ್ಪಗಳಿಂದ ಖಂಡಿತವಾಗಿಯೂ ಭಯವಿರುವುದಿಲ್ಲ.

*ಇಲ್ಲಿಗೆ ಬ್ರಹ್ಮವೈವರ್ತ ಮಹಾಪುರಾಣದ ಶ್ರೀಕೃಷ್ಣಜನ್ಮಖಂಡದಲ್ಲಿ ನಾರದ ನಾರಾಯಣ ಸಂವಾದಾಂತರ್ಗತವಾದ ರಾಧಾಕೃಷ್ಣ ಸಂವಾದದಲ್ಲಿ ಧನ್ವಂತರಿಯ ದರ್ಪಭಂಗ ಮತ್ತು ಮನಸಾದೇವಿಯ ವಿಜಯವೆಂಬ ಐವತ್ತೊಂದನೆಯ ಅಧ್ಯಾಯವು ಸಮಾಪ್ತವಾದುದು.*

* * * * *